(ಇಡೀ ಮತ್ತು ಒಡೆದ), 78. ಬಟಾಣಿ, 79. ತೊಗರಿ (ಇಡೀ ಮತ್ತು ಒಡೆದ), 80. ಮೋತ್ (ಇಡೀ ಮತ್ತು ಒಡೆದ), 81. ಎಲ್ಲಾ ತರಕಾರಿಗಳು (ಗರ್ಕಿನ್ ಹೊರತುಪಡಿಸಿ ಸೊಪ್ಪುಗಳು ಸೇರಿಸಿ), 82. ಕಾಯಿಗಳು, 83. ಹಸಿರುಮೆಣಸಿನ ಕಾಯಿ, 84. ಈರುಳ್ಳಿ, 85. ಆಲೂಗಡ್ಡೆ, 86. ಸುವರ್ಣಗೆಡ್ಡೆ, 87. ಸಿಹಿಗೆಣಸು (ಗೆಣಸು), 88. ಟೊಮ್ಯೊಟೋ, 89. ಬೀಟೆ (ರೋಸ್‌ವುಡ್), 90. ಬಿಲ್ವಾಲ, 91. ಉರುವಲು ಕಟ್ಟಿಗೆ, 92. ಗಂಜಾನ್, 93. ಹಡಗ, 94. ಹಳದಿ, 95. ಹನಿಮತ್ತಲ್, 96. ಹೊನ್ನೆ, 97. ಐಯಾನಿ, 98. ಹಲಸಿನಮರ, 99. ಜಂಬ, 100. ಕಲನ್, 101. ಕಿಂಡಲ್, 102. ಮಾವಿನಮರ, 103. ಮತ್ತಿ, 104. ನಂದಿ, 105. ರಾಂಪತ್ರೆ, 106. ತೇಗ (ಸಾಗವಾನಿ), 107. ಬಿಳಿ ದೇವದಾರು (ಕೇದರ), 108. ಸಿಲ್ವರ್ ಓಕ್, 109. ನೀಲಗಿರಿ, 110. ವೀಳ್ಯೆದೆಲೆ, 111. ಬೆಲ್ಲ, 112. ತೆಂಗಿನಕಡ್ಡಿ, 113. ಒಣದ್ರಾಕ್ಷಿ.

**ಅನುಸೂಚಿ**

ಬೀದರ್ ನಗರಸಭೆ ವ್ಯಾಪ್ತಿಯ ಹಳ್ಳದಕೇರಿ ಗ್ರಾಮದ ಸರ್ವೆ ನಂ. 62/1ರ 5ಎಕರೆ ಜಮೀನಿನ ಈ ಕೆಳಗಿನ ಸೀಮಾಬದ್ಧ ಸ್ಥಳ:

ಪೂರ್ವಕ್ಕೆ: ಹಳ್ಳದಕೇರಿ ಫಾರ್ಮಿನ ತೋಟಗಾರಿಕೆ ಇಲಾಖೆಯವರ ಉಳಿದ ಜಮೀನು ಸರ್ವೆ ನಂ.62.

ಪಶ್ಚಿಮಕ್ಕೆ: ಶ್ರೀ ಬಾಬು ತಂದೆ ಸೈದಪ್ಪ ಬೀದರ್ ಇವರ ಜಮೀನು ಸರ್ವೆ ನಂ.63 ಹಾಗೂ ಈಜುಕೊಳ (ಖಾಸಗಿ ಜಮೀನು)

ಉತ್ತರಕ್ಕೆ: ಕರ್ನಾಟಕ ಲೋಕೋಪಯೋಗಿ ಇಲಾಖೆ ರಸ್ತೆ (ಬೀದರ್‌ದಿಂದ ಹೈದ್ರಾಬಾದ್)

ದಕ್ಷಿಣಕ್ಕೆ: ಶ್ರೀ ಶಾಮಸೂನ ತಂದೆ ಧರ್ಮಪ್ಪ ಬೀದರ್ ಇವರ ಖಾಸಗಿ ಜಮೀನು ಸರ್ವೆ ನಂ.64.

**ಸೈಯದ್ ಜಮೀರ್ ಪಾಷಾ**
ನಿರ್ದೇಶಕರು,
ಕೃಷಿ ಮಾರಾಟ ಇಲಾಖೆ, ಬೆಂಗಳೂರು.

ಪಿ.ಆರ್. 775

**ಕರ್ನಾಟಕ ಲೋಕ ಸೇವಾ ಆಯೋಗದ ನಡವಳಿಗಳು**

**ವಿಷಯ :** ಆಯೋಗವು ನಡೆಸಿದ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ದುರಾಚಾರ-ಅಭ್ಯರ್ಥಿಯ ಮೇಲೆ ದಂಡನೆ ವಿಧಿಸಲು ಆದೇಶ.

**ಪ್ರಸ್ತಾವನೆ :**

ಆಯೋಗವು ನಗರಾಭಿವೃದ್ಧಿ ಇಲಾಖೆಯ ಅಧೀನಕ್ಕೊಳಪಡುವ ನಗರ ಸಭೆಗಳು, ಪುರಸಭೆಗಳು ಮತ್ತು ಪಟ್ಟಣ ಪಂಚಾಯತ್‌ಗಳಲ್ಲಿನ 135 ಕಿರಿಯ ಅಭಿಯಂತರರು (ಸಿವಿಲ್) ಹುದ್ದೆಗಳಿಗೆ ಅಭ್ಯರ್ಥಿಗಳ ಆಯ್ಕೆಗಾಗಿ ದಿನಾಂಕ: 20.12.2004ರಂದು ಸ್ಪರ್ಧಾತ್ಮಕ ಪರೀಕ್ಷೆಯನ್ನು ನಡೆಸಿತು. ಸದರಿ ಪರೀಕ್ಷೆಯಲ್ಲಿ ಶ್ರೀ ಮೊಹಮ್ಮದ್ ಇಸ್ಮಾಯಿಲ್ (ನೋಂದಣಿ ಸಂಖ್ಯೆ 57806) ಇವರು ದುರಾಚಾರ ಎಸಗಿ ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 20ನ್ನು ಉಲ್ಲಂಘನೆ ಮಾಡಿರುವುದು ಆಯೋಗದ ಗಮನಕ್ಕೆ ಬಂದ ಕಾರಣ ಅಭ್ಯರ್ಥಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಿ ವಿಚಾರಣೆ ಪ್ರಾರಂಭಿಸಲಾಯಿತು.

ಶ್ರೀ ಮೊಹಮ್ಮದ್ ಇಸ್ಮಾಯಿಲ್‌ರವರು ಆಯೋಗದ ನೋಟೀಸಿಗೆ ಉತ್ತರವಾಗಿ ನೀಡಿದ ದಿನಾಂಕ: 17.01.2005ರ ಹೇಳಿಕೆಯಲ್ಲಿ ತಾನು ಪರೀಕ್ಷೆಯನ್ನು 4 ಘಂಟೆಗೆ ಮುಗಿಸಿ ವಾಪಸ್ಸು ಬೀದರ್‌ಗೆ ಹೋಗಲು ಬಸ್‌ನಲ್ಲಿ 5 ಘಂಟೆಗೆ ಬುಕ್ ಮಾಡಿದ್ದ ಪ್ರಯುಕ್ತ ಅವಸರದಲ್ಲಿ ಸರಿಯಾಗಿ ಎಲ್ಲಾ ಪೇಪರ್‌ಗಳನ್ನು ಕೊಟ್ಟಿರಬಹುದೆಂದು ಭಾವಿಸಿ ಉತ್ತರ ಪತ್ರಿಕೆಯನ್ನು ತನ್ನ ಜೊತೆಯಲ್ಲಿ ತೆಗೆದುಕೊಂಡು ಹೋದೆನೆಂದು ತನ್ನ ತಪ್ಪನ್ನು ಒಪ್ಪಿಕೊಳ್ಳುತ್ತಾ, ಆ ತಪ್ಪನ್ನು ಕ್ಷಮಿಸಬೇಕೆಂದು ಕೋರಿರುವ ಹಿನ್ನಲೆಯಲ್ಲಿ ವಿಚಾರಣಾಧಿಕಾರಿಯವರು ಈ ಅಭ್ಯರ್ಥಿಯ ಅಭ್ಯರ್ಥಿತ್ವವನ್ನು ರದ್ದುಪಡಿಸುವಂತೆ ಆಯೋಗಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಆಯೋಗವು ಮೇಲೆ ತಿಳಿಸಿರುವ ವರದಿಯನ್ನು ಕೂಲಂಕುಷವಾಗಿ ಪರಿಶೀಲಿಸಿ ಅದನ್ನು ಒಪ್ಪಿ ಕೆಳಕಂಡಂತೆ ಆದೇಶ ಮಾಡಿರುತ್ತದೆ.

**ಆದೇಶ ಸಂಖ್ಯೆ: ಆರ್(2) 308/ 2005-06/ ಪಿಎಸ್‌ಸಿ, ಬೆಂಗಳೂರು, ದಿನಾಂಕ: 28ನೇ ಏಪ್ರಿಲ್, 2005**

ಕರ್ನಾಟಕ ಲೋಕಸೇವಾ ಆಯೋಗವು ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 20ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಮೊಹಮ್ಮದ್ ಇಸ್ಮಾಯಿಲ್ (ನೋಂದಣಿ ಸಂಖ್ಯೆ: 57806) ಇವರು ಮೇಲೆ ಪ್ರಸ್ತಾವನೆಯಲ್ಲಿ ತಿಳಿಸಿರುವ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ದುರಾಚಾರ ಎಸಗಿದ ಕಾರಣದಿಂದ ಅವರ ಸದರಿ ಪರೀಕ್ಷೆಯ ಅಭ್ಯರ್ಥಿತ್ವವನ್ನು ರದ್ದುಪಡಿಸಿದೆ.

ಆಯೋಗದ ಆದೇಶದ ಮೇರೆಗೆ,
**ಬಿ.ಎಸ್. ರಾಮಪ್ರಸಾದ್**
ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ.

ಪಿ.ಆರ್.776

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ಪ್ರಕರಣ ಸಂಖ್ಯೆ: ಕಾಪಕ: ಕಸ:21:05, ದಿನಾಂಕ: 16ನೇ ಮೇ, 2005**

| ಅರ್ಜಿದಾರರು: | ವಿರುದ್ಧ | ಪ್ರತಿವಾದಿಗಳು: |
|---|---|---|
| 1. ಮಂಜುಳ ಕೋಂ ಕಾಂತರಾಜ್, ಕೂಸಲಿಗೆರೆ, ಭದ್ರಾವತಿ. | | 1. ಅಫ್ಸರ್ ಪಾಷಾ ಬಿನ್ ಫಕ್ರುದ್ದಿನ್, ಸೌತ್‌ಕ್ರಾಸ್ ಸ್ಟ್ರೀಟ್, ಬೆಂಗಳೂರು-47. |
| | | 2. ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ., ಲಕ್ಷ್ಮೀಟವರ್ ಸಂಖ್ಯೆ:200-3, 1ನೇ ಫ್ಲೋರ್ ಆರ್.ವಿ. ರಸ್ತೆ, ಬೆಂಗಳೂರು. |

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದು ಏನೆಂದರೆ, ಕಾಂತರಾಜ್ ರವರು ಪ್ರತಿವಾದಿಯವರಲ್ಲಿ ಚಾಲಕರಾಗಿ ಕೆಲಸದ ಮೇಲೆ ಇದ್ದಾಗ 04.09.2003ರಂದು ಅಪಘಾತಗೊಂಡಿರುವುದರಿಂದ ಮೃತರಾಗಿರುತ್ತಾರೆ.

ಮೃತರು ಪ್ರತಿವಾದಿಯವರ ಕಡೆ ಕೆಲಸದಲ್ಲಿರುವ ಕಾರಣ ಪರಿಹಾರ ಹಣಕ್ಕಾಗಿ ಅರ್ಜಿದಾರರು ದಿನಾಂಕ: 04.05.2005ರಂದು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದುದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದು ಏನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿವಸಗಳ ಒಳಗಾಗಿ ತಮ್ಮ ಆಕ್ಷೇಪಣೆಗಳಾಗಲೀ ಅಥವಾ

ಅರ್ಜಿಗಳನ್ನಾಗಲಿ ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿತ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದರೆ, ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಪಿ.ಆರ್.777 ಶಿವಮೊಗ್ಗಜಿಲ್ಲೆ, ಶಿವಮೊಗ್ಗ.

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ರಾಮನಗರ ಉಪ-ವಿಭಾಗ, ರಾಮನಗರಂ ರವರ ನಡವಳಿಕೆಗಳು**

**ವಿಷಯ :** ಅಮಲ್ಜಾರಿ ಸಂಖ್ಯೆ: ಸಿಇಪಿ 28: 2004-05 ಶ್ರೀಮತಿ ಜಮೀಲಬಾನು ಕೋಂ ಲೇ: ಸೈಯದ್ ರಸೂಲ್ ಹಾಜಿನಗರ, ರಾಮನಗರ ಇವರ ಸ್ಥಿರಾಸ್ತಿಯನ್ನು ರಾಮನಗರಂ ಅರ್ಬನ್ ಕೋ-ಆಪರೇಟಿವ್ ಬ್ಯಾಂಕಿನ ಹೆಸರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಉಲ್ಲೇಖ :** 1. ಮಾರಾಟಾಧಿಕಾರಿಗಳು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ರಾಮನಗರಂ ರವರ ಪತ್ರದ ಸಂಖ್ಯೆ: ಸಸಸನಿರಾ 46: ಮಾಅ: ಹರಾಜು 10:04-05 ದಿನಾಂಕ: 02.02.2005.

2. ಈ ಕಛೇರಿಯ ನೋಟೀಸ್ ಸಂಖ್ಯೆ: ಸಸನಿರಾ 46, ಸಿ.ಇ.ಪಿ.28: 04-05, ದಿನಾಂಕ: 10.03.2005.

**ಪ್ರಸ್ತಾವನೆ :**

ಶ್ರೀಮತಿ ಜಮೀಲಬಾನು ಕೋಂ ಸೈಯದ್ ರಸೂಲ್, ಹಾಜಿ ನಗರ ರಾಮನಗರ ರವರು ರಾಮನಗರಂ ಅರ್ಬನ್ ಕೋ. ಆಪರೇಟಿವ್ ಬ್ಯಾಂಕಿನಲ್ಲಿ ಸಾಲ ಪಡೆದು ಸುಸ್ತಿದಾರರಾದ ಪ್ರಯುಕ್ತ ದಿನಾಂಕ 23.12.2003 ರಂದು ಡಿಕ್ರಿ ಪಡೆದು ಅಮಲ್ಜಾರಿ ಸಂಖ್ಯೆ: 28: 04-05ರಂತೆ ಕ್ರಮ ಜರುಗಿಸಿ ಅಮಲ್ಜಾರಿ ಬಾಕಿ ರೂ. 3,14,287-00 (ರೂಪಾಯಿ ಮೂರು ಲಕ್ಷದ ಹದಿನಾಲ್ಕು ಸಾವಿರದ ಇನ್ನೂರ ಎಂಭತ್ತೇಳು ಮಾತ್ರ) ಗಳನ್ನು ವಸೂಲಿ ಮಾಡಿಕೊಳ್ಳಲು ಮೇಲೆ ತಿಳಿಸಿದ ಶ್ರೀಮತಿ ಜಮೀಲಬಾನು ಕೋಂ ಸೈಯದ್ ರಸೂಲ್ ಇವರ ಷೆಡ್ಯೂಲ್ ಸ್ಥಿರಾಸ್ತಿಯನ್ನು ನಿಯಮಾನುಸಾರ ಬಹಿರಂಗ ಹರಾಜು ಮಾಡಲು ದಿನಾಂಕ: 27.01.2005ರಂದು ನಿಗದಿಗೊಳಿಸಿ ಪ್ರಚುರ ಪಡಿಸಲಾಗಿತ್ತು. ಸದರಿ ದಿನಾಂಕದಂದು ಹರಾಜಿನಲ್ಲಿ ಬಿಡ್ದುದಾರರು ಯಾರೂ ಭಾಗವಹಿಸದೇ ಹೋದ ಪ್ರಯುಕ್ತ ಶ್ರೀಮತಿ ಜಮೀಲಬಾನು ಕೋಂ ಸೈಯದ್ ರಸೂಲ್‌ರವರಿಂದ ಬ್ಯಾಂಕಿಗೆ ಬಾಕಿಯಿರುವ ರೂ.3,14,287-00 ಗಳಿಗೆ ಅವರ ಸ್ಥಿರಾಸ್ತಿಯನ್ನು ಬ್ಯಾಂಕಿನ ಹೆಸರಿಗೆ ವರ್ಗಾವಣೆ ಮಾಡಲು ಉಲ್ಲೇಖ (1)ರಲ್ಲಿ ಮಾರಾಟಾಧಿಕಾರಿಗಳು ಕೋರಿರುತ್ತಾರೆ.

ಶ್ರೀಮತಿ ಜಮೀಲಬಾನು ಕೋಂ ಲೇ. ಸೈಯದ್ ರಸೂಲ್‌ರವರಿಗೆ ಮಾರಾಟಾಧಿಕಾರಿಗಳ ಶಿಫಾರಸ್ಸಿನ ಬಗ್ಗೆ ದಿನಾಂಕ: 30.03.2005ರಂದು ಕಛೇರಿಯಲ್ಲಿ ಹಾಜರಾಗಿ ಅವರ ಆಕ್ಷೇಪಣೆಗಳನ್ನು ಸಲ್ಲಿಸಲು ಕಾಲಾವಕಾಶ ನೀಡಿ ಉಲ್ಲೇಖ (2)ರ ನೋಟೀಸನ್ನು ಅಂಚೆ ನೋಂದಣಿ ಮೂಲಕ ಜಾರಿ ಮಾಡಲಾಗಿತ್ತು. ಸದರಿ ನೋಟಿಸನ್ನು ಬಾಕಿದಾರರು ಪಡೆದಿರುತ್ತಾರೆ. ಆದರೂ ಸಹ ನಿಗದಿತ ದಿನಾಂಕದಂದು ಕಛೇರಿಗೆ ಹಾಜರಾಗಿ ಅವರ ಹೇಳಿಕೆಯನ್ನು ನೀಡಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಮಾರಾಟಾಧಿಕಾರಿಗಳ ಶಿಫಾರಸ್ಸಿನಂತೆ ಬಾಕಿದಾರರ ಸ್ಥಿರಾಸ್ತಿಯನ್ನು ಬ್ಯಾಂಕಿನ ಹೆಸರಿಗೆ ವರ್ಗಾವಣೆ ಮಾಡುವ ಸಲುವಾಗಿ ಈ ಕೆಳಗಿನ ಆದೇಶವನ್ನು ಮಾಡಲಾಗಿದೆ.

**ಆದೇಶ**

**ಸಂಖ್ಯೆ: ಸಸಸನಿರಾ: 46: ಸಿಇಪಿ:28: 04-05, ದಿನಾಂಕ: 30ನೇ ಮಾರ್ಚ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಶ್ರೀ ಹೆಚ್. ಗವಿಯಪ್ಪ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ರಾಮನಗರ ಉಪವಿಭಾಗ, ರಾಮನಗರ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರನ್ವಯ ರೂಪಿಸಲಾದ ಕರ್ನಾಟಕ ಸಹಕಾರ ಸಂಘಗಳ ನಿಯಮ 38ರನ್ವಯ ಹಾಗೂ ಕರ್ನಾಟಕ ರಾಜ್ಯ ಸರ್ಕಾರದ ಅಧಿಸೂಚನೆ ಕ್ರಮಾಂಕ ಸಿಎಂಡಬ್ಲ್ಯೂ: 69: ಸಿಎಲ್‌ಎಂ: 2001 ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀಮತಿ ಜಮೀಲಬಾನು ಕೋಂ ಲೇ. ಸೈಯದ್ ರಸೂಲ್, ರಾಮನಗರ ಇವರ ಸ್ಥಿರಾಸ್ತಿಯನ್ನು ದಿನಾಂಕ: 27.01.2005ರಂದು ಬಹಿರಂಗ ಹರಾಜಿನಲ್ಲಿ ಬ್ಯಾಂಕಿಗೆ ಬರಬೇಕಾದ ರೂ.3,14,287-00 ಬಾಕಿ ಮೊತ್ತಕ್ಕೆ ಹರಾಜು ಮಾಡಲಾಗಿ ಬಿಡ್ದುದಾರರು ಯಾರೂ ಹರಾಜಿನಲ್ಲಿ ಭಾಗವಹಿಸದೇ ಹೋದ ಪ್ರಯುಕ್ತ ಶ್ರೀಮತಿ ಜಮೀಲಬಾನು ಕೋಂ. ಲೇ. ಸೈಯದ್ ರಸೂಲ್ ರವರ ಈ ಕೆಳಕಂಡ ಸ್ವತ್ತನ್ನು ಈ ಕೆಳಗಿನ ಷರತ್ತುಗಳೊಡನೆ ಬ್ಯಾಂಕಿನ ಹೆಸರಿಗೆ ವರ್ಗಾವಣೆ ಮಾಡಿ ಸ್ಥಿರೀಕರಣಗೊಳಿಸಲಾಗಿದೆ. ಸಹಕಾರ ಸಂಘಗಳ ಕಾಯ್ದೆಯ ಅನ್ವಯ ನಿಗದಿತ ನಮೂನೆ-VIII ರಂತೆ ಸ್ಥಿರ ಸ್ವತ್ತು ವರ್ಗಾವಣೆ ಪತ್ರವನ್ನು ಈ ಆದೇಶಕ್ಕೆ ಲಗತ್ತಿಸಲಾಗಿದೆ.

**ಷೆಡ್ಯೂಲ್ ಸ್ವತ್ತಿನ ವಿವರ**

ರಾಮನಗರ ಟೌನ್ ಹಾಜಿನಗರದಲ್ಲಿರುವ ಮುನಿಸಿಪಲ್ ಖಾತೆ ನಂ.1331:1033 ನಿವೇಶನ ಸಂಖ್ಯೆ: 13

ಪೂರ್ವ-ಪಶ್ಚಿಮ-60 ಅಡಿ

ಉತ್ತರ-ದಕ್ಷಿಣ-40 ಅಡಿ

**ಚಕ್ಕುಬಂದಿ**

ಪೂರ್ವಕ್ಕೆ-ಖಾಲಿ ಜಮೀನು

ಪಶ್ಚಿಮಕ್ಕೆ-ಮುನೀರ್ ಅಹಮದ್ ಜಮೀನು

ಉತ್ತರಕ್ಕೆ-ರಸ್ತೆ

ದಕ್ಷಿಣಕ್ಕೆ-ಅಬ್ದುಲ್ ಲತೀಫ್ ಜಮೀನು

**ಷರತ್ತುಗಳು ಹಾಗೂ ನಿಯಮಗಳು**

1. ಬ್ಯಾಂಕಿಗೆ ವರ್ಗಾವಣೆ ಮಾಡಲಾದ ಸ್ಥಿರ ಸ್ವತ್ತನ್ನು ಬ್ಯಾಂಕು ಉಪಯೋಗಿಸತಕ್ಕದ್ದು.
2. ಪುನಃ ಮಾರಾಟ ಮಾಡುವ ಸಂದರ್ಭದಲ್ಲಿ ಸ್ಥಿರಾಸ್ತಿಯ ಅವಿಭಕ್ತಕುಟುಂಬದ ಸದಸ್ಯರಿಗೆ ಆದ್ಯತೆ ನೀಡುವುದು.
3. ಈ ಮಾರಾಟದ ವರ್ಗಾವಣೆ ಆದೇಶ ತಲುಪಿದ ಒಂದು ವಾರದೊಳಗಾಗಿ ಮಾರಾಟದ ಹಣವನ್ನು ಬ್ಯಾಂಕಿಗೆ ಜಮಾ-ಖರ್ಚು ಮಾಡಿಕೊಳ್ಳತಕ್ಕದ್ದು.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿ ಮುದ್ರೆಯೊಡನೆ ದಿನಾಂಕ: 30ನೇ ಮಾರ್ಚ್, 2005ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ರಾಮನಗರ ಉಪ-ವಿಭಾಗ, ರಾಮನಗರ.

**ನಮೂನೆ-VIII**

**(ಸಹಕಾರ ಸಂಘಗಳ ನಿಯಮ 1960ರ ಅನುಬಂಧ 38(ಎ)**

**ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 101ರ ಅನ್ವಯ ಪರಬಾಕಿ ಬಗ್ಗೆ ಪ್ರಮಾಣಪತ್ರ**

ರಾಮನಗರಂ ಅರ್ಬನ್ ಕೋ. ಆಪರೇಟಿವ್ ಬ್ಯಾಂಕ್ (ನಿ.) ರಾಮನಗರ ಇದರ ವ್ಯವಸ್ಥಾಪಕರು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 71ರನ್ವಯ ಆದೇಶವನ್ನು ಜಾರಿ ಮಾಡಿರುವುದರಿಂದ ಶ್ರೀ ಜಮೀಲಬಾನು ಕೋಂ. ಲೇ: ಸೈಯದ್ ರಸೂಲ್ ರಾಮನಗರ ಇವರ ಷೆಡ್ಯೂಲ್ ಸ್ವತ್ತನ್ನು ಮಾರಾಟದ ದಿನಾಂಕ: 27.01.2005ರಂದು ಬಹಿರಂಗ ಹರಾಜಿನಲ್ಲಿಟ್ಟಿದ್ದು ಹರಾಜಿನಲ್ಲಿ ಕೊಂಡುಕೊಳ್ಳುವವರು ಯಾರೂ ಇಲ್ಲದಿರುವುದರಿಂದ ಸದರಿ ಸ್ವತ್ತನ್ನು ಮಾರಾಟ ಮಾಡಲಾಗಲಿಲ್ಲ ಎಂಬುದಾಗಿ ವಸೂಲಾಧಿಕಾರಿಯಾದ ನಾನು ಸಮಾಧಾನ ಹೊಂದುತ್ತೇನೆ.

ಸದರಿ ಸ್ವತ್ತಿನಲ್ಲಿ ಡಿಕ್ರಿ ಬಾಕಿದಾರನ ಹಕ್ಕು ಅಧಿಕಾರ ನಾಮ ಮತ್ತು ಬಾಧ್ಯತೆಯು ರಾಮನಗರಂ ಅರ್ಬನ್ ಕೋ ಆಪರೇಟಿವ್ ಬ್ಯಾಂಕ್ (ನಿ.) ರಾಮನಗರಕ್ಕೆ ನಿರ್ದಿಷ್ಟವಾಗಿರತಕ್ಕದೆಂದು ಮತ್ತು ಈ ಆದೇಶಕ್ಕೆ ಸೇರಿಸಲ್ಪಟ್ಟ ಅಧಿಸೂಚನೆಯಲ್ಲಿ ವಿಧಿಸಲಾದ ಷರತ್ತುಗಳಂತೆ ಸದರಿ ಅಧಿನಿಯಮ 101ಬಿ. ಪ್ರಕರಣದನ್ವಯ ಈ ಮೂಲಕ ಆದೇಶ ನೀಡಲಾಗಿದೆ.

**ಸ್ವತ್ತಿನ ವಿವರ**

ರಾಮನಗರ ಟೌನ್ ಹಾಜಿನಗರದಲ್ಲಿರುವ ಮುನಿಸಿಪಲ್ ಖಾತೆ ನಂ.1331:1033 ನಿವೇಶನ ಸಂಖ್ಯೆ: 13

ಪೂರ್ವ-ಪಶ್ಚಿಮ-60 ಅಡಿ

ಉತ್ತರ-ದಕ್ಷಿಣ-40 ಅಡಿ

**ಚಕ್ಕುಬಂದಿ**

ಪೂರ್ವಕ್ಕೆ-ಖಾಲಿ ಜಮೀನು

ಪಶ್ಚಿಮಕ್ಕೆ-ಮುನೀರ್ ಅಹಮದ್ ಜಮೀನು

ಉತ್ತರಕ್ಕೆ-ರಸ್ತೆ

ದಕ್ಷಿಣಕ್ಕೆ-ಅಬ್ದುಲ್ ಲತೀಫ್ ಜಮೀನು.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ರಾಮನಗರ ಉಪ-ವಿಭಾಗ, ರಾಮನಗರ.

ಪಿ.ಆರ್.778

**ಕೃಷಿ ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿಗಳು, ಬೆಂಗಳೂರು ಇವರ ನಡವಳಿಕೆಗಳು**

**ವಿಷಯ :** ಶ್ರೀ ಎಫ್.ಆರ್. ತಳವಾರ, ಕೃಷಿ ಸಹಾಯಕರು ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಿಯಾದ ಬಗ್ಗೆ ಶಿಸ್ತುಕ್ರಮ.

**ಓದಲಾಗಿದೆ :**
1. ಜಂಟಿ ಕೃಷಿ ನಿರ್ದೇಶಕರು, ಹಾವೇರಿ ಇವರ ಪತ್ರ ಸಂಖ್ಯೆ: ಸಿಬ್ಬಂದಿ: ವಿಚಾರಣೆ: ಕೃಸ:ಎಸ್‌ಆರ್‌ತ: 04-05:6806-07, ದಿನಾಂಕ: 26.10.2004.
2. ಈ ಕಛೇರಿಯ ಸೂಚನಾ ಪತ್ರ ಸಂಖ್ಯೆ: ಸಿಬ್ಬಂದಿ-1: ವಿಚಾರಣೆ-7: 16:04-05, ದಿನಾಂಕ: 08.12.2004.
3. ಶ್ರೀ ಎಫ್.ಆರ್. ತಳವಾರ, ಕೃಷಿ ಸಹಾಯಕರ ಸ್ವೀಕೃತಿ ಪತ್ರ ದಿನಾಂಕ: 25.01.2005.
4. ಶ್ರೀ ಎಫ್.ಆರ್. ತಳವಾರ ಇವರ ಪ್ರತಿವಾದ ದಿನಾಂಕ: 26.02.2005.

**ಪ್ರಸ್ತಾವನೆ :**

ಶ್ರೀ ಎಫ್.ಆರ್. ತಳವಾರ, ಕೃಷಿ ಸಹಾಯಕರು, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಸವಣೂರು ವ್ಯಾಪ್ತಿಯಲ್ಲಿನ ರೈತ ಸಂಪರ್ಕ ಕೇಂದ್ರ, ಹತ್ತಿ ಮತ್ತೂರ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಆರು ಅವಧಿಗಳ ವಿವಿಧ ಕಾಲಾವಧಿಗಳಲ್ಲಿ ಕರ್ತವ್ಯಕ್ಕೆ ಒಟ್ಟು 561 ದಿನಗಳು ಅನಧಿಕೃತವಾಗಿ ಗೈರು ಹಾಜರಾಗಿದ್ದಾರೆಂದು ಆರೋಪಿಸಿ ಇವರ ವಿರುದ್ಧ ದೋಷಾರೋಪಣಾ ಪಟ್ಟಿಗಳನ್ನು ಅನುಬಂಧ-1 ರಿಂದ 4 ರವರೆವಿಗೆ ತಯಾರಿಸಿ ದಾಖಲಾತಿಗಳ ಸಹಿತ ಓದಲಾದ (1)ರ ಪತ್ರ ಮುಖೇನ ಜಂಟಿ ಕೃಷಿ ನಿರ್ದೇಶಕರು, ಹಾವೇರಿ ಇವರು ಇಲಾಖೆಗೆ ಪ್ರಸ್ತಾವನೆ ಸಲ್ಲಿಸಿ ಶಿಸ್ತುಕ್ರಮ ಕೈಗೊಳ್ಳಲು ಕೋರಿದ್ದರು. ಸದರಿ ದೋಷಾರೋಪಣಾ ಪಟ್ಟಿಗಳನ್ನು ಪರಿಷ್ಕರಿಸಿ-ಓದಲಾದ (2)ರಲ್ಲಿನ ಈ ಕಛೇರಿಯ ಸೂಚನಾ ಪತ್ರದೊಂದಿಗೆ ಆರೋಪಿತರಿಗೆ ಜಾರಿಗೊಳಿಸಿ ಆರೋಪಗಳನ್ನು ಒಪ್ಪುವ ಅಥವಾ ನಿರಾಕರಿಸುವ ಬಗ್ಗೆ ಪ್ರತಿವಾದವನ್ನು ಸಲ್ಲಿಸಲು 15 ದಿನಗಳ ಕಾಲಾವಕಾಶ ನೀಡಲಾಯಿತು. ದೋಷಾರೋಪಣಾ ಪಟ್ಟಿಗಳನ್ನು ಪಡೆದ ಆರೋಪಿತರು ಓದಲಾದ (3)ರಲ್ಲಿನ ಸ್ವೀಕೃತಿ ಪತ್ರವನ್ನು ಸಲ್ಲಿಸಿರುತ್ತಾರೆ. ಓದಲಾದ (4)ರಲ್ಲಿನ ಪ್ರತಿವಾದವನ್ನು ಸಲ್ಲಿಸಿದ ಆರೋಪಿತರು ಅನಾರೋಗ್ಯ ನಿಮಿತ್ತ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಿ ಆಗಿರುವೆನೆ ವಿನಃ ಉದ್ದೇಶ ಪೂರ್ವಕವಾಗಿ ಕರ್ತವ್ಯಕ್ಕೆ ಗೈರು ಹಾಜರಿ ಆಗಿಲ್ಲವೆಂದು ಇದೇ ಕಾರಣದಿಂದ ಕಾಲಕಾಲಕ್ಕೆ ನಿಗದಿತ ಸಮಯದೊಳಗೆ ರಜೆ ಅರ್ಜಿ ಸಲ್ಲಿಸಿ ಚಿಕಿತ್ಸೆಗಾಗಿ ಹೋಗಲು ನನ್ನಿಂದ ಸಾಧ್ಯವಾಗುವುದಿಲ್ಲವೆಂದು ಕರ್ತವ್ಯ ನಿರ್ವಹಿಸಿದ ಅವಧಿಗಳಲ್ಲಿ ನನ್ನ ಪಾಲಿನ ಕರ್ತವ್ಯಗಳನ್ನು ಸುಸೂತ್ರವಾಗಿ ಮಾಡಿಕೊಂಡು ಬಂದಿರುತ್ತೇನೆಂದು, ಆದರಂತೆ ಮುಂದುವರೆಯಲು ನನ್ನ ಆರೋಗ್ಯವು ಅವಕಾಶ ನೀಡುತ್ತಿಲ್ಲವೆಂದು ಇನ್ನು ಮುಂದೆಯು ಆರೋಗ್ಯವು ಸುಧಾರಿಸುವ ಲಕ್ಷಣಗಳು ಕಾಣುತ್ತಿಲ್ಲವೆಂದು ಮಾಹಿತಿ ಸಲ್ಲಿಸಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಲು ಕೋರಿ ಕ್ಷಯ ಮತ್ತು ಎದೆ ರೋಗ ಆಸ್ಪತ್ರೆ, ಗದಗ ಇಲ್ಲಿನ ಅಧೀಕ್ಷಕರು ನೀಡಿರುವ ವೈದ್ಯಕೀಯ ಹಾಜರಾತಿ ಪ್ರಮಾಣ ಪತ್ರವನ್ನು ಸಲ್ಲಿಸಿರುತ್ತಾರೆ. ಇವರ ಪ್ರತಿವಾದವನ್ನು ಪರಿಗಣಿಸಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಕಛೇರಿ ಆದೇಶ ಸಂಖ್ಯೆ: ಸಿಬ್ಬಂದಿ-1: ವಿಚಾರಣೆ-7:16:2004-05, ದಿನಾಂಕ: 30ನೇ ಏಪ್ರಿಲ್, 2005**

ಈ ಕೆಳಗೆ ಸಹಿ ಮಾಡಿರುವ ಕೃಷಿ ನಿರ್ದೇಶಕರಾದ ಶ್ರೀ ಜಿ. ಪ್ರಕಾಶ್ ಆದ ನಾನು ಈ ಪ್ರಕರಣವನ್ನು ಕೂಲಂಕುಷವಾಗಿ ಪರಿಶೀಲಿಸಿ ಶ್ರೀ ಎಫ್.ಆರ್. ತಳವಾರ, ಕೃಷಿ ಸಹಾಯಕರು, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಸವಣೂರು ಇವರನ್ನು ಆರೋಪಿ ಎಂದೇ ಪರಿಗಣಿಸಿ ಆದೇಶಿಸಿರುತ್ತೇನೆ.

ಶ್ರೀ ಎಫ್.ಆರ್. ತಳವಾರ, ಕೃಷಿ ಸಹಾಯಕರ ಪ್ರತಿವಾದವನ್ನು ಪರಿಗಣಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 8(vi)ರ ಅಡಿಯಲ್ಲಿ ಇವರನ್ನು ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿ ಆದೇಶಿಸಿರುತ್ತೇನೆ.

ಶ್ರೀ ಎಫ್.ಆರ್. ತಳವಾರ, ಕೃಷಿ ಸಹಾಯಕರು ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಿಯಾದ ಅವಧಿಯನ್ನು ಅವರ ಲೆಕ್ಕದಲ್ಲಿರುಷ್ಟು ದಿನಗಳ ರಜೆಗಳನ್ನು ರಜೆಯನ್ನಾಗಿಯೂ ಉಳಿದ ಕಾಲಾವಧಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 1957ರ ನಿಯಮ 106-ಎ ರೀತ್ಯ ಸಕ್ರಮಗೊಳಿಸಲು ಆದೇಶಿಸಿರುತ್ತೇನೆ.

**ಜಿ. ಪ್ರಕಾಶ್**

ಪಿ.ಆರ್.779

ಕೃಷಿ ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿಗಳು.

**ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರಕರಣ ಸಂಖ್ಯೆ: ಕಾಅದಾ:ಕಾನಪ: ಸಿಆರ್-743/ 05, ದಿನಾಂಕ: 13ನೇ ಮೇ, 2005**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

ಅರ್ಜಿದಾರರು:

1. ಅನ್ನಪೂರ್ಣಮ್ಮ ಕೋಂ ಲೇಟ್. ಬಸವರಾಜಪ್ಪ. ವಾಸ: ಮನೆ ನಂ. 628/62, ಕೆ.ಬಿ. ಬಡಾವಣೆ ಶಿವಾನಂದ ಸ್ವಾಮಿ ಕಾಂಪೌಂಡ್, ಸಿದ್ದಮ್ಮ ಪಾರ್ಕ್ ಹತ್ತಿರ, ದಾವಣಗೆರೆ.

ಪ್ರತಿವಾದಿಗಳು:

1. ಆರ್.ವಿ. ನಾಯ್ಡು ಬಿನ್ ಸಿ. ರಾಜಗೋಪಾಲ್‌ನಾಯ್ಡು, ನಾಯ್ಡು ಎಲೆಕ್ಟ್ರಿಕಲ್ಸ್ 1ನೇ ಕ್ರಾಸ್ ಎಲೆಕ್ಟ್ರಿಕಲ್ ಕಂಟ್ರಾಕ್ಟರ್ ಮನೆ ನಂ. 981, 2ನೇ ಕ್ರಾಸ್ ಕೆ.ಟಿ.ಜೆ. ನಗರ ದಾವಣಗೆರೆ.
2. ಮೆ. ಸ್ಕಿಲ್‌ಟೆಕ್ ಇಂಜಿನೀಯರ್ಸ್ ಅಂಡ್ ಕಂಟ್ರಾಕ್ಟರ್ ಮತ್ತು ಪಾಲುದಾರರು, ನಂ.281/ ಕೆ.30, 1ನೇ ಮಹಡಿ, ನಾರಾಯಣ ಶಾಸ್ತ್ರಿ ರೋಡ್, ಮೈಸೂರು-20.
3. ದಿ ಬ್ರಾಂಚ್ ಮ್ಯಾನೇಜರ್, ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ.ಲಿ., ಸಂಪಂಗಿ ರೋಡ್, ಮಲ್ಲೇಶ್ವರಂ, ಬೆಂಗಳೂರು.

**ಪ್ರಕಟಣೆ**

ಶ್ರೀಮತಿ ಅನ್ನಪೂರ್ಣಮ್ಮ ಇವರು ತಾವು ಮೃತ ಸಂಗಮೇಶ ಇವರ ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಸಂಗಮೇಶ ರವರು ಒಂದನೇ ಪ್ರತಿವಾದಿಗಳಾದ ಆರ್.ವಿ. ನಾಯ್ಡು ಮತ್ತು ಮೆ. ಸ್ಕಿಲ್‌ಟೆಕ್ ಇಂಜಿನೀಯರ್ಸ್ ಇವರ ವಿದ್ಯುಚ್ಛಕ್ತಿ ಪ್ರಾಜೆಕ್ಟ್‌ನಲ್ಲಿ ಕಾರ್ಮಿಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**

ಪಿ.ಆರ್.780

ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ,
ದಾವಣಗೆರೆಜಿಲ್ಲೆ, ದಾವಣಗೆರೆ.

**ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರಕರಣ ಸಂಖ್ಯೆ: ಕಾಅದಾ:ಕಾನಪ: ಸಿಆರ್-64/ 05, ದಿನಾಂಕ: 19ನೇ ಫೆಬ್ರವರಿ, 2005**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

ಅರ್ಜಿದಾರರು:

1. ಶ್ರೀಮತಿ ಪಾರ್ವತಮ್ಮ ಕೋಂ. ಲೇ:ಚಿನ್ನಸ್ವಾಮಿ ತೆವರ್, ನಿಟ್ಟುವಳ್ಳಿ, ಹೊಸ ಬಡಾವಣೆ, ದಾವಣಗೆರೆ.

ಪ್ರತಿವಾದಿಗಳು:

1. ಮೆ: ಟಿ.ಡಿ.ಎಂ. ಇನ್‌ಫ್ರಾ ಸ್ಟಕ್ಚರ್ ಪ್ರೈ.ಲಿ. 401/2 ಸ್ವಸ್ತಿಕ್‌ಮನಂದಿ ಆರ್ಕೆಡ್ 75, ಸುಬೇದಾರ್ ಛತ್ರಂ ರೋಡ್, ಶೇಷಾದ್ರಿಪುರಂ, ಬೆಂಗಳೂರು.
2. ದಿ ಡಿವಿಜನಲ್ ಮ್ಯಾನೇಜರ್, ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ., ಎಸ್‌ಕೆ. ಕಾಂಪ್ಲೆಕ್ಸ್, ಕೇಶವಪುರ, ಹುಬ್ಬಳ್ಳಿ.

**ಪ್ರಕಟಣೆ**

ಶ್ರೀಮತಿ ಪಾರ್ವತಮ್ಮ ಇವರುಗಳಾದ ತಾವು ಮೃತ ಚಿನ್ನಸ್ವಾಮಿ ತೆವರ್ ಇವರ ಹೆಂಡತಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಚಿನ್ನಸ್ವಾಮಿ ತೆವರ್ ರವರು ಒಂದನೇ ಪ್ರತಿವಾದಿಗಳಾದ ಮೆ: ಟಿ.ಡಿ.ಎಂ. ಇನ್‌ಫ್ರಾ ಸ್ಟಕ್ಚರ್ ಪ್ರೈ.ಲಿ., ಇವರ ಪವರ್ ಪಿನಿಷನ್ ಮೆಷಿನ್‌ರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**

ಪಿ.ಆರ್.781

ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ,
ದಾವಣಗೆರೆಜಿಲ್ಲೆ, ದಾವಣಗೆರೆ.

**ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**
**ಪ್ರಕರಣ ಸಂಖ್ಯೆ: ಕಾಅಿದಾ:ಕಾನಪ: ಸಿಆರ್-28/ 05, ದಿನಾಂಕ: 13ನೇ ಏಪ್ರಿಲ್, 2005**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

1. ಈರಮ್ಮ ಕೋಂ ಕರೀಗೌಡಪ್ಪ.
ವಾಸ: ನುಗ್ಗೇನಹಳ್ಳಿ ಗ್ರಾಮ, ನೀತಿಗೆರೆ ಅಂಚೆ,
ಚನ್ನಗಿರಿ ತಾಲ್ಲೂಕು, ದಾವಣಗೆರೆ ಜಿಲ್ಲೆ.

1. ಸಿ.ಓ. ಜಯದೇವಪ್ಪ ಬಿನ್ ಓಂಕಾರಪ್ಪ,
ಮಾರುತಿ ವ್ಯಾನ್ ಮಾಲೀಕರು, ನಂ.ಕೆಎ-17-ಎಂ-3695.
ವಾಸ: ಬಾಡಗ್ರಾಮ, ದಾವಣಗೆರೆ ತಾಲ್ಲೂಕು.
2. ಯುನೈಟೆಡ್ ಇಂಡಿಯಾ ಇನ್ಶೂರೆನ್ಸ್ ಕಂ.ಲಿ., ವಿಭಾಗೀಯ ಕಛೇರಿ, ನಂ.273/13, 1ನೇ ಮಹಡಿ ಮಲ್ಲಿಕಾರ್ಜುನ ಕಾಂಪ್ಲೆಕ್ಸ್ ಪ್ರವಾಸಿ ಮಂದಿರ ರಸ್ತೆ, ದಾವಣಗೆರೆ.

**ಪ್ರಕಟಣೆ**

ಶ್ರೀಮತಿ ಈರಮ್ಮ ಇವರುಗಳಾದ ತಾವು ಮೃತ ಮಹಾದೇವಪ್ಪ ಇವರ ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಮಹಾದೇವಪ್ಪ ರವರು ಒಂದನೇ ಪ್ರತಿವಾದಿಗಳಾದ ಸಿ.ಓ. ಜಯದೇವಪ್ಪ ಇವರ ಮಾರುತಿ ವ್ಯಾನ್‌ನಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ,
ದಾವಣಗೆರೆಜಿಲ್ಲೆ, ದಾವಣಗೆರೆ.

ಪಿ.ಆರ್.782

**ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಕೇಂದ್ರ ಕಛೇರಿ, ಬೆಂಗಳೂರು ಇವರ ನಡವಳಿಗಳು**
**ನಂ. ಆರ್‌ಸಿಎಸ್:ಎಲ್‌ಕ್ಯೂಡಿ: 54:04-05, ದಿನಾಂಕ: 16ನೇ ಮೇ, 2005**

**ವಿಷಯ :** ನಿಷ್ಕ್ರಿಯಗೊಂಡಿರುವ ಶ್ರೀ ಎನ್. ಗೋವಿಂದೇಗೌಡ ಸ್ಮಾರಕ ಕೈಗಾರಿಕಾ ಸಹಕಾರ ಸಂಘ ನಿ., ಶಿವಮೊಗ್ಗ, ಇದರ ಸಮಾಪನೆ ಬಗ್ಗೆ.

**ಉಲ್ಲೇಖ :**
1. ಸ.ಸಂ. ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಇವರ ಪತ್ರ ಸಂಖ್ಯೆ: ಜೆಆರ್‌ಬಿ/ ಎಲ್‌ಕ್ಯೂಡಿ/ 31/ ಎಲ್‌ಎಂಸಿ/ 04-05, ದಿನಾಂಕ: 07.01.2005.
2. ಈ ಕಛೇರಿಯ ಇದೇ ಕ್ರಮಾಂಕದ ನೋಟೀಸ್ ದಿನಾಂಕ: 11.03.2005.
3. ಸ.ಸಂ. ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ಇವರ ಪತ್ರ ಸಂಖ್ಯೆ: ಸನಿಶಿ 24: ಎಲ್‌ಕ್ಯೂಡಿ:04-05/ 1923, ದಿನಾಂಕ: 23.03.2005.

**ಪ್ರಸ್ತಾವನೆ :**

ನಿಷ್ಕ್ರಿಯಗೊಂಡ ಶ್ರೀ ಎನ್. ಗೋವಿಂದೇಗೌಡ ಸ್ಮಾರಕ ಕೈಗಾರಿಕಾ ಸಹಕಾರ ಸಂಘ ನಿ, ಶಿವಮೊಗ್ಗ ಸಂಘವು ಸಂಖ್ಯೆ: ಕೈಸಸಂ: ಕೈಸ: 3:124:21577:99:2000 ದಿನಾಂಕ: 19.02.2000 ರಂತೆ ನೋಂದಣಿ ಆಗಿರುತ್ತದೆ. ಇದರ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟವನ್ನು ಮೀರಿದ್ದಾಗಿರುತ್ತದೆ.

ಸಹಕಾರ ಸಂಘಗಳ ಜಂಟಿ ನಿಬಂಧಕರು ಬೆಂಗಳೂರು, ಇವರ ವರದಿಯಂತೆ ಸಂಘವು ತನ್ನ ನೋಂದಾಯಿತ ಉದ್ದೇಶಗಳನ್ನು ಈಡೇರಿಸುವ ನಿಟ್ಟಿನಲ್ಲಿ ಕಾರ್ಯನಿರ್ವಹಿಸದೇ ಕೇವಲ ಸಿಬ್ಬಂದಿ ಸಂಬಳ ಖರ್ಚು, ಸಭಾ ಖರ್ಚು ಇತರೆ ಖರ್ಚುಗಳಿಗೆ ಸಂಗ್ರಹಿಸಿದ ಷೇರಿನಲ್ಲಿ ವೆಚ್ಚ ಮಾಡುತಲಿದ್ದು, ಈ ಸಂಘವನ್ನು ಹೀಗೆ ಮುಂದುವರೆಸಿದಲ್ಲಿ ಸದಸ್ಯರಿಂದ ಸಂಗ್ರಹವಾದ ಷೇರು ಮೊತ್ತ ಶೂನ್ಯವಾಗುತ್ತದೆಂದು ತಿಳಿಸಿರುತ್ತಾರೆ.

ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)ರನ್ವಯ ಸಮಾಪನೆಗೊಳಿಸಲು ಉಲ್ಲೇಖ(1)ರಂತೆ ಆಡಳಿತ ಮಂಡಳಿ ಸದಸ್ಯರಿಗೆ ನೋಟೀಸ್ ಜಾರಿ ಮಾಡಿದ್ದು, ಸದಸ್ಯರಿಂದ ಸಂಘವು ಸಮಾಪನೆಗೊಳಿಸಲು ಆಕ್ಷೇಪಣೆ ಅಥವಾ ಹೇಳಿಕೆ ಏನಾದರೂ ಇದ್ದಲ್ಲಿ ತಿಳಿಸಲು ಕೋರಲಾಗಿತ್ತು. ಆದರೆ ಸಂಘದ ಸದಸ್ಯರಿಂದ ಯಾವುದೇ ಆಕ್ಷೇಪಣೆ ಸ್ವೀಕೃತವಾಗದ ಕಾರಣ, ಸಂಘವನ್ನು ಸಮಾಪನೆಗೊಳಿಸಲು ಆಕ್ಷೇಪಣೆ ಇಲ್ಲವೆಂದು ಪರಿಗಣಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಿರುವ ಅಂಶಗಳ ಹಿನ್ನಲೆಯಲ್ಲಿ ಹಾಗೂ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)ರನ್ವಯ ದತ್ತವಾಗಿರುವ ಅಧಿಕಾರವನ್ನು ಪ್ರಯೋಗಿಸಿ ಬಿ. ನಾಗರಾಜ ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ನಾನು ಶ್ರೀ ಎನ್. ಗೋವಿಂದೇಗೌಡ ಸ್ಮಾರಕ ಕೈಗಾರಿಕಾ ಸಹಕಾರ ಸಂಘ ನಿ, ಶಿವಮೊಗ್ಗ, ಇದನ್ನು ಸಮಾಪನೆಗೊಳಿಸಿ ಆದೇಶ ಹೊರಡಿಸಿರುತ್ತೇನೆ, ಹಾಗೂ ಸಹಕಾರ ಸಂಘಗಳ ಕಾಯ್ದೆ ಕಲಂ 73ರ ಪ್ರಕಾರ ಮಾರಾಟಾಧಿಕಾರಿ, 1ನೇ ವೃತ್ತ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಶಿವಮೊಗ್ಗ, ಇವರನ್ನು ಸಮಾಪನಾಧಿಕಾರಿಯಾಗಿ ನೇಮಿಸಿರುತ್ತೇನೆ.

ಸಮಾಪನಾಧಿಕಾರಿಯು ಸಂಘದ ಪ್ರಭಾರವನ್ನು ಆದೇಶ ಹೊರಡಿಸಿದ ದಿನಾಂಕದ ಒಂದು ವಾರದೊಳಗೆ ವಹಿಸಿಕೊಂಡು ಪ್ರಭಾರ ಪಟ್ಟಿಯ ಪ್ರತಿಯನ್ನು ಈ ಕಛೇರಿಗೆ ಸಲ್ಲಿಸತಕ್ಕದ್ದು, ಹಾಗೂ ಸಹಕಾರ ಸಂಘಗಳ ಕಾಯ್ದೆ 1959 ಕಲಂ 74 ಮತ್ತು ನಿಯಮ 33ರಂತೆ ಸಮಾಪನಾಧಿಕಾರಿಯ ಕರ್ತವ್ಯ ನಿರ್ವಹಿಸುವುದಲ್ಲದೆ, ಸಂಘದ ಇತ್ತೀಚಿನ ಲೆಕ್ಕ ತಪಾಸಣಾ ವರದಿಯನ್ನಾಧರಿಸಿ ಆದ್ಯತಾ ಪಟ್ಟಿಯನ್ನು ತಯಾರಿಸಿ ಈ ಕಛೇರಿಯ ಅನುಮೋದನೆ ಪಡೆದು ಆಸ್ತಿ-ಜವಾಬ್ದಾರಿಗಳನ್ನು ತ್ವರಿತವಾಗಿ ವಿಲೇವಾರಿ ಮಾಡಿ ಸಂಘದ ನೋಂದಣಿ ಕ್ರಮಾಂಕವನ್ನು ರದ್ದುಗೊಳಿಸಲು ಸೂಕ್ತ ಕ್ರಮ ಜರುಗಿಸುವುದು.

ಈ ಆದೇಶವನ್ನು ಸ್ವಸಹಿ ಮತ್ತು ಕಛೇರಿಯ ಮುದ್ರೆಯೊಂದಿಗೆ ಈ ದಿನ ದಿನಾಂಕ: 16.05.2005ರಂದು ನೀಡಲಾಗಿದೆ.

**ಬಿ. ನಾಗರಾಜ**
ಸಹಕಾರ ಸಂಘಗಳ ಅಪರ ನಿಬಂಧಕರು, (ಕೈಗಾರಿಕೆ ಮತ್ತು ಇತರೆ).

ಪಿ.ಆರ್.783

## ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ನಿರ್ದೇಶಕರ ನಡವಳಿ

**ವಿಷಯ :** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಗಟ್ಟಿಗುಂದ ಗ್ರಾಮದ ಸರ್ವೆ ನಂ. 145ರಲ್ಲಿ 2-00 ಎಕರೆಗೆ ಕಪ್ಪು ಅಲಂಕಾರಿಕ ಶಿಲೆಗಾಗಿ ಶ್ರೀಮತಿ ಲಲಿತಮ್ಮ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 449ರ ಗುತ್ತಿಗೆಯನ್ನು ಪುನರ್ ಸ್ಥಾಪಿಸಿರುವ ಬಗ್ಗೆ.

**ಉಲ್ಲೇಖ :** ಸರ್ಕಾರದ ಪತ್ರ ಸಂಖ್ಯೆ: ಸಿ.ಐ. 256 ಎಂ.ಎಂ.ಎನ್. 2004, ದಿನಾಂಕ: 15.04.2005.

**ಪ್ರಸ್ತಾವನೆ :**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಗಟ್ಟಿಗುಂದ ಗ್ರಾಮದ ಸರ್ವೆ ನಂ.145ರಲ್ಲಿ 2-00 ಎಕರೆ ವಿಸ್ತೀರ್ಣದಲ್ಲಿ ಅಲಂಕಾರಿಕ ಶಿಲೆಗಾಗಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 449ರ ಗುತ್ತಿಗೆಯನ್ನು ಶ್ರೀಮತಿ ಲಲಿತಮ್ಮ ರವರ ಹೆಸರಿನಲ್ಲಿ ದಿನಾಂಕ: 25.02.2001 ರಿಂದ 10 ವರ್ಷಗಳಿಗಾಗಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಗುತ್ತಿಗೆದಾರರು ಗುತ್ತಿಗೆ ಮೇಲಿನ ಬಾಕಿಯನ್ನು ಪಾವತಿಸದೆ ಗುತ್ತಿಗೆಯನ್ನು ನಿಷ್ಕ್ರಿಯಗೊಳಿಸಿದ ಕಾರಣ ದಿನಾಂಕ: 20.01.2003ರಿಂದ ಜಾರಿಗೆ ಬರುವಂತೆ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದ ಅಡಿಯಲ್ಲಿ ಗುತ್ತಿಗೆಯನ್ನು ರದ್ದುಗೊಳಿಸಲಾಗಿತ್ತು.

ಅದರಂತೆ ಗುತ್ತಿಗೆದಾರರು ಪರಿಷ್ಕರಣ ಅರ್ಜಿಯನ್ನು ನಿಯಮ 53(2)ರ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರಂತೆ ಸರ್ಕಾರಕ್ಕೆ ಸಲ್ಲಿಸಿದ್ದು ಅದರಂತೆ ಸರ್ಕಾರವು ಉಲ್ಲೇಖಿತ ಪತ್ರದಲ್ಲಿ ಅರ್ಜಿಯನ್ನು ಪರಿಗಣಿಸಿ ಗುತ್ತಿಗೆದಾರರಿಗೆ ಮತ್ತೊಂದು ಅವಕಾಶವನ್ನು ಗುತ್ತಿಗೆ ನಿಬಂಧನೆಗಳನ್ನು ಸರಿಪಡಿಸಿಕೊಳ್ಳಲು ತಿಳಿಸಿ ಗುತ್ತಿಗೆಯನ್ನು ಪುನರ್ ಸ್ಥಾಪಿಸಲು ಆದೇಶಿಸಿರುವುದರಿಂದ ಆ ಆದೇಶ ಮಾಡಲಾಗಿದೆ.

### ಆದೇಶ ಸಂಖ್ಯೆ: ಗಭೂಇ:ಕಗಗು: 449: 2005-06/ 2003, ದಿನಾಂಕ: 12ನೇ ಮೇ, 2005

ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಗಟ್ಟಿಗುಂದ ಗ್ರಾಮದ ಸರ್ವೆ ನಂ. 145ರಲ್ಲಿ 2-00 ಎಕರೆಗೆ ಶ್ರೀಮತಿ ಲಲಿತಮ್ಮ ರವರ ಹೆಸರಿನಲ್ಲಿ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 449ರ ಗುತ್ತಿಗೆಯನ್ನು ಗುತ್ತಿಗೆ ರದ್ದುಗೊಳಿಸಿದ ದಿನಾಂಕ: 20.01.2003ರಿಂದ ಗುತ್ತಿಗೆಯನ್ನು ಪುನರ್ ಸ್ಥಾಪಿಸಿ ಗುತ್ತಿಗೆ ಮೇಲಿನ ಇಲ್ಲಿಯವರೆಗಿನ ರಾಜಧನ/ ಸ್ಥಿರ ತೆರಿಗೆಯನ್ನು ಪೂರ್ಣವಾಗಿ ಪಾವತಿಸುವಂತೆ ತಿಳಿಸಿ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮಗಳ ಷರತ್ತಿನಂತೆ ಗುತ್ತಿಗೆಯನ್ನು ಪುನರ್ ಸ್ಥಾಪಿಸಲಾಗಿದೆ.

ಪಿ.ಆರ್.784 ನಿರ್ದೇಶಕರು.

## ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ನಿರ್ದೇಶಕರ ನಡವಳಿ

**ವಿಷಯ :** ಹಾಸನ ಜಿಲ್ಲೆ ಸಕಲೇಶಪುರ ತಾಲ್ಲೂಕು, ಚಿಕ್ಕಕಲ್ಲೂರು ಗ್ರಾಮದಲ್ಲಿ ಮಲ್ಟೀಕಲರ್ ಗ್ರಾನೈಟ್‌ಗಾಗಿ ಶ್ರೀ ಮಹಮದ್ ಹನಿಫ್ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 428 ಗುತ್ತಿಗೆಯನ್ನು ಗುತ್ತಿಗೆಯ ಮೇಲಿನ ಬಾಕಿ ಪಾವತಿಸದೆ ಇದ್ದ ಕಾರಣ ರದ್ದುಗೊಳಿಸುತ್ತಿರುವ ಬಗ್ಗೆ.

**ಉಲ್ಲೇಖ :**
1. ಕೇಂದ್ರ ಕಛೇರಿ ಪತ್ರ ಸಂಖ್ಯೆ: ಗಭೂಇ: ಡಿಸಿಬಿ: ಕಗಗು 428: 2004-05, 6140 ದಿನಾಂಕ: 31.01.2005.
2. ಹಿರಿಯ ಭೂವಿಜ್ಞಾನಿ, ಹಾಸನ ರವರ ಪತ್ರ ಸಂಖ್ಯೆ: ಗಭೂಇ: ಹಾಖವಿ: ಕಗಗು: 2005-06: 396 ದಿನಾಂಕ: 25.04.2005.

**ಪ್ರಸ್ತಾವನೆ :**

ಹಾಸನಜಿಲ್ಲೆ ಸಕಲೇಶಪುರ ತಾಲ್ಲೂಕು, ಚಿಕ್ಕಕಲ್ಲೂರು ಗ್ರಾಮದ ಸರ್ವೆ ನಂ. 23ರಲ್ಲಿ ಶ್ರೀ ಮಹಮದ್ ಹನೀಫ್ ರವರಿಗೆ 9.00 ಎಕರೆಗೆ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 428 ಇದ್ದು, ಸದರಿ ಗುತ್ತಿಗೆಯು ದಿನಾಂಕ: 28.03.2001ರಿಂದ 10 ವರ್ಷಗಳಿಗಾಗಿ ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರ 1ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 2004ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ.5,04,318/- ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿದ್ದು, ಗುತ್ತಿಗೆಯ ಮೇಲಿನ ಸ್ಥಿರ ತೆರಿಗೆ ಬಾಕಿ ಪಾವತಿಸದೆ ಇರುವ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39ರಂತೆ ಸರ್ಕಾರದ ಅಧಿಸೂಚನೆ-III ಸಂಖ್ಯೆ: ಸಿಐ 418 ಎಂಆರ್‌ಸಿ 92 ದಿನಾಂಕ: 02.07.94ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ರದ್ದುಪಡಿಸಬೇಕಾಗಿದೆ.

### ಆದೇಶ ಸಂಖ್ಯೆ: ಗಭೂಇ: ಡಿಸಿಬಿ: ಕಗಗು: 428: 2005-06/ 2425, ದಿನಾಂಕ: 21ನೇ ಮೇ, 2005

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39ರಂತೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಹಾಸನ ಜಿಲ್ಲೆ ಸಕಲೇಶಪುರ ತಾಲ್ಲೂಕಿನ, ಚಿಕ್ಕಕಲ್ಲೂರು ಗ್ರಾಮದ ಸರ್ವೆ ನಂ. 23ರಲ್ಲಿ 9-00 ಎಕರೆಗೆ ಮಲ್ಟಿಕಲರ್ ಗ್ರಾನೈಟ್‌ಗಾಗಿ ಶ್ರೀ ಮಹಮದ್ ಹನೀಫ್ ರವರ ಹೆಸರಿನಲ್ಲಿನ ಮಂಜೂರಾದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 428ನ್ನು ಗುತ್ತಿಗೆ ಮೇಲಿನ ಬಾಕಿ ಪಾವತಿಸದೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವ ಕಾರಣ ತಕ್ಷಣದಿಂದ ಜಾರಿಗೆ ಬರುವಂತೆ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ. ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಜಾಮೀನು ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಮಾಡಿಕೊಳ್ಳಲಾಗಿದೆ.

ಪಿ.ಆರ್.787 ನಿರ್ದೇಶಕರು.

## ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-5, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29

### ಸಂಖ್ಯೆ: ಡಬ್ಲ್ಯೂಸಿಎ: ಎಫ್.ಸಿ./ ಸಿಆರ್-8/ 05, ದಿನಾಂಕ: 16ನೇ ಮೇ, 2005

**ಅರ್ಜಿದಾರರು:**

1. ಶ್ರೀ ಫಕ್ರುದ್ದೀನ್, ಬಿನ್ ಕಲಂಧರ್ ಸಾಬ್,
2. ಮೆಹಬೂಬ್ ಬಿನ್ ಫಕ್ರುದ್ದೀನ್,
3. ಗುಲಾಬ್ ಜಾನ್ ಬಿನ್ ಫಕ್ರುದ್ದೀನ್,
ವಾಸ: ನಂ.15, 2ನೇ ಮುಖ್ಯರಸ್ತೆ, ಓಕಳಿಪುರಂ, ಬೆಂಗಳೂರು.

**ವಿರುದ್ಧ**

**ಪ್ರತಿವಾದಿಗಳು:**

1. ಟಿ.ಹೆಚ್. ಹುಸೇನ್, ಬಿನ್ ಮೆಹಬೂಬ್, ಪಾಷ, ಸಿ.ಪಿ.ಪಿ. ರಸ್ತೆ, ಮರಿಚನ್ನಪ್ಪ ಕಾಲೋನಿ, ವಿಜಿಪುರ, ದೇವನಹಳ್ಳಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ.
2. ನ್ಯಾಷನಲ್ ಇನ್‌ಶ್ಯೂರೆನ್ಸ್ ಕಂ.ಲಿ., ರೀಜನಲ್ ಆಫೀಸ್, ಸುಬ್ರಾಮ್ ಕಾಂಪ್ಲೆಕ್ಸ್, ಎಂ.ಜಿ. ರಸ್ತೆ, ಬೆಂಗಳೂರು.

**ಪ್ರಕಟಣೆ**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ: 09.05.2005ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, 1 ಹಾಗೂ 2ನೇ ಅರ್ಜಿದಾರರ ಮಗ ಮತ್ತು 3ನೇ ಅರ್ಜಿದಾರರ ಅಣ್ಣ ಶ್ರೀ ಸಾಬ್‌ಜಾನ್ ಇವರು ಮೇಲೆ ವಿಳಾಸಿಸಿರುವ ಪ್ರತಿವಾದಿ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ ಪ್ರತಿವಾದಿಯ ವಿರುದ್ಧ ಕ್ರಮ ತೆಗೆದುಕೊಂಡು ತಮಗೆ ಕಾಯ್ದೆಯನ್ವಯ ಪರಿಹಾರ ಹಾಗೂ ಇತರೆ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದ ನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಎನ್.ಬಿ. ರಾಮಚಂದ್ರ**
ಕಾರ್ಮಿಕ ಪರಿಹಾರ ಆಯುಕ್ತರು ಹಾಗೂ ಕಾರ್ಮಿಕ ಅಧಿಕಾರಿ
ಉಪವಿಭಾಗ-5, ಬೆಂಗಳೂರು-560 029.

ಪಿ.ಆರ್.788

## KARNATAKA POWER TRANSMISSION CORPORATION LIMITED
## OFFICE OF THE EXECUTIVE ENGINEER (EI), BMWSD, KPTCL A.R. CIRCLE, BANGALORE
## SCHEME NOTIFICATION
## No. EEE/BMWSD/ AEE (O)/94, Dated: 11th April, 2005

KPTCL has formulated a scheme for up rating of existing 66 KV Double circuit line constructed between 220 KV Yarandanahalli station to 66 KV station at Electronic City phase I from Coyote to Drake by introduction of intermediate 66 KV Towers.

In the first phase of up rating of 66 KV Double circuit line it is proposed to up rate a part of 66 KV Yarandanahalli- Electronic City line up to the Tap point of BIOCON on Jigani-Bommasandra Link Road.

KPTCL has sanctioned an estimate for arranging 66 KV Power supply to proposed 66 KV station at BIOCON Park, Jigani-Bommasandra Link Road, Anekal taluk.

The existing line pass through the following villages (1) Yarandanahalli, (2) Kachanayakanahalli, (3) Jigani Industrial Area. It is proposed to errect the intermediate towers directly below the line and replace the existing conductor by drake ACSR conductor.

This scheme is included in the Annual Programme of works for the year 2004-05 vide item No.49 under list-5 for establishing sub-section at Electronic City phase II section II with associated lines at a cost of 600 Lakhs.

The KPTCL will be exercising the rights under Indian Telegraphic Act 1898 and Indian Electricity Act 1910.

**K.R. SETHURAM**
Executive Engineer (EI)
BMWSD, KPTCL, A.R. Circle, Bangalore.

PD-46

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-2, ಬಿಜಾಪುರ**
**ಪ್ರಕರಣ ಸಂಖ್ಯೆ: ಕಾಅಬ:ಕಾನಪ: ಮಪ್ರ:ಎಸ್ಆರ್-100/ 2005, ದಿನಾಂಕ: 16ನೇ ಮೇ, 2005**

| **ಅರ್ಜಿದಾರರು:** | **ವಿರುದ್ಧ** | **ಪ್ರತಿವಾದಿಗಳು:** |
|---|---|---|
| 1. ಗಂಗುಬಾಯಿ ನಾರಾಯಣ ಮಾಳಿ,<br>ವಾಸ: ಮನಗೋಣ, ತಾಲ್ಲೂಕು-ಬಾರಸಿ,<br>ಜಿಲ್ಲೆ-ಸೊಲ್ಲಾಪುರ, ಮಹಾರಾಷ್ಟ್ರ ರಾಜ್ಯ,<br>ಸದ್ಯದವಾಸ- ಹೇಗಡ್ಯಾಳ, ಜಿಲ್ಲೆ-ಬಿಜಾಪುರ. | | 1. ಸುಭಾಷ ಕೆ. ನಿಚಲ,<br>ಎಟ್ಪ್: ಪೋಸ್ಟ್-ರಾಲೇರಸ್, ತಾಲ್ಲೂಕು-ಬಾರಸಿ,<br>ಜಿಲ್ಲೆ-ಸೊಲ್ಲಾಪುರ, ಮಹಾರಾಷ್ಟ್ರ ರಾಜ್ಯ,<br>2. ಮ್ಯಾನೇಜರ್, ನ್ಯಾಶನಲ್ ಇನ್ಸೂರೆನ್ಸ್ ಕಂ.ಲಿ., ಬಿಜಾಪುರ. |

**ಪ್ರಕಟಣೆ**

ಶ್ರೀಮತಿ ಗಂಗುಬಾಯಿ ನಾರಾಯಣ ಮಾಳಿ ಇವರುಗಳಾದ ತಾವು ಮೃತ ಬಾಪು ನಾರಾಯಣ ಮಾಳಿ ಇವರ ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಬಾಪು ನಾರಾಯಣ ಮಾಳಿ ಇವರು ಒಂದನೇ ಪ್ರತಿವಾದಿಗಳಾದ ಸುಭಾಷ ಕೆ. ನಿಚಲ ಇವರ ಟ್ರಕ್ ಸಂಖ್ಯೆ:ಎಂಎಂಆರ್-9944ರಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತ ಶಾಸನ ಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ದಲಿಂಗಪ್ಪ ಆಲೂರು**
ಕಾರ್ಮಿಕ ಪರಿಹಾರ ಆಯುಕ್ತರು ಉಪವಿಭಾಗ-2,
ಬಿಜಾಪುರ ಜಿಲ್ಲೆ, ಬಿಜಾಪುರ.

ಪಿ.ಆರ್.790

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-2, ಬಿಜಾಪುರ**

**ಪ್ರಕರಣ ಸಂಖ್ಯೆ: ಕಾಅಬ:ಕಾನಪ: ಮಪ್ರ:ಎಸ್‌ಆರ್-101/ 2005, ದಿನಾಂಕ: 16ನೇ ಮೇ, 2005**

**ಅರ್ಜಿದಾರರು:** 

1. ಕಾಂತಬಾಯಿ ವಿಠಲ ಜಾಧವ,
2. ವಿಠಲ ಪಾಂಡುರಂಗ ಜಾಧವ,
   ವಾಸ: ಕಣ್ಣೂರ, ಜಿಲ್ಲೆ: ಬಿಜಾಪೂರ.

**ವಿರುದ್ಧ**

**ಪ್ರತಿವಾದಿಗಳು:**

1. ಸುಭಾಷ ಅರ್ಜುನ ರಾಠೋಡ,
   ಎಟ್ಪ್: ಪೋಸ್ಟ್-ಕುಮತೆ, ತಾಲ್ಲೂಕು-ಸೌಥ ಸೊಲ್ಲಾಪುರ,
   ಜಿಲ್ಲೆ-ಸೊಲ್ಲಾಪುರ, ಮಹಾರಾಷ್ಟ್ರ ರಾಜ್ಯ.
2. ದಿ ಬ್ರಾಂಚ್ ಮ್ಯಾನೇಜರ್,
   ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ.ಲಿ., ಬಿಜಾಪುರ.

**ಪ್ರಕಟಣೆ**

ಶ್ರೀ: ಶ್ರೀಮತಿ (1) ಕಾಂತಬಾಯಿ ವಿಠಲ ಜಾಧವ (2) ವಿಠಲ ಪಾಂಡುರಂಗ ಜಾಧವ ಇವರುಗಳಾದ ತಾವು ಮೃತ ಸಂತೋಷ ವಿಠಲ ಜಾಧವ ಇವರ ತಂದೆ-ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಸಂತೋಷ ವಿಠಲ ಜಾಧವ ಇವರು ಒಂದನೇ ಪ್ರತಿವಾದಿಗಳಾದ ಸುಭಾಷ ಅರ್ಜೂನ ರಾಠೋಡ ಇವರ ಟಮ್ ಟಮ್ ಸಂಖ್ಯೆ: ಎಂಹೆಚ್-13:ಆರ್-1332ರಲ್ಲಿ ಕ್ಲೀನರ್ ಮತ್ತು ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತ ಶಾಸನ ಬದ್ದ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ದಲಿಂಗಪ್ಪ ಆಲೂರು**
ಕಾರ್ಮಿಕ ಪರಿಹಾರ ಆಯುಕ್ತರು ಉಪವಿಭಾಗ-2,
ಬಿಜಾಪುರ ಜಿಲ್ಲೆ, ಬಿಜಾಪುರ.

ಪಿ.ಆರ್.791

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದಕ್ಷಿಣ ಕನ್ನಡ ಉಪವಿಭಾಗ-1, ಬೈಂದೂರ್‌ವೆಲ್ ವೃತ್ತ, ಮಂಗಳೂರು-2, ಇವರ ನ್ಯಾಯಾಲಯದಲ್ಲಿ**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ: ಸಿಆರ್-19/ 05ಎಫ್, ದಿನಾಂಕ: 16ನೇ ಮೇ, 2005**

**ಅರ್ಜಿದಾರರು:**

1. ಶ್ರೀ ನಾರಾಯಣ S/o ದಿ. ರಾಮ
2. ಶಕುಂತಳ W/o ನಾರಾಯಣ,
   C/o ಮೋಹನ್,
   ನಾಡಾರ್, ಕೋಟೆಕಾರ್ ಗ್ರಾಮ, ಮಂಗಳೂರು.

**ವಿರುದ್ಧ**

**ಪ್ರತಿವಾದಿಗಳು:**

1. ಅಲ್‌ಫ್ರೀದ್ ಪಾಲನ್ನ S/o ಸದಾನಂದ ಪಾಲನ್ನ ಶಾಲುಮ್,
   ಪಾವಂಜೆ, ಹಳೆಯಂಗಡಿ ಪಿ.ಓ.
2. ಯುನೈಟೆಡ್ ಇಂಡಿಯಾ ಇನ್ಸುರೆನ್ಸ್ ಕಂ.ಲಿ., ಪೋಸ್ಟ್ ಬಾಕ್ಸ್
   ನಂ.14 ಶ್ರೀ ವಿಠಲ ಮೈನ್ ರಸ್ತೆ, ಸುರತ್ಕಲ್, ಮಂಗಳೂರು.

**ಅಧಿಸೂಚನೆ**

ಅರ್ಜಿದಾರನಾದ: ಶ್ರೀ ನಾರಾಯಣ ಇವರು ತಮ್ಮ ಮಗನಾದ ಕೆ. ಪ್ರದೀಪ್ ಇವರು 1ನೇ ಪ್ರತಿವಾದಿಗಳಾದ ಶ್ರೀ ಅಲ್‌ಫ್ರೀದ್ ಪಾಲನ್ನ ಇವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 10.04.2005ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿಂದ 30 ದಿನಗಳೊಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಎಸ್.ಸಿ. ರಾಮಚಂದ್ರ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ದಕ್ಷಿಣ ಕನ್ನಡ, ಉಪವಿಭಾಗ-1, ಮಂಗಳೂರು.

ಪಿ.ಆರ್.792

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-2, ಬಿಜಾಪುರ**

**ಪ್ರಕರಣ ಸಂಖ್ಯೆ: ಕಾಅಬ:ಕಾನಪ:106/ 2005, ದಿನಾಂಕ: 20ನೇ ಮೇ, 2005**

**ಅರ್ಜಿದಾರರು:**

1. ಶೈಲ ಶ್ರೀ ನೀಲಕಂಠಪ್ಪಾ ಬಿರಾದಾರ,
   ವಯಸ್ಸು:20, ಉದ್ಯೋಗ: ಮನೆಕೆಲಸ.
   ತಾ: ಜಲನಗರ, ಬಿಜಾಪುರ.
2. ಮೋಗೇಶ ನೀಲಕಂಠಪ್ಪಾ ಬಿರಾದಾರ,
3. ವೆದಗೊಂಡಪ್ಪಾ ಬಾಪುಗೌಡ ಬಿರಾದಾರ,
4. ತಂಗನಬಸವ್ವಾ ನೆಡ್‌ಗೊಂಡಪ್ಪಾ ಬಿರಾದಾರ,
   ತಾ: ಬಿಜಾಪುರ.

**ವಿರುದ್ಧ**

**ಪ್ರತಿವಾದಿಗಳು:**

1. ರಮೇಶ ಶಿವಶರಣ ಪೂಜಾರಿ,
   ವಯಸ್ಕ, ಉ-ಲಾರಿಮಾಲಿಕ, ಗಚ್ಚಿನಕಟ್ಟೆ ಕಾಲನಿ,
   ವಿಜಾಪುರ.
2. ದಿ ಮ್ಯಾನೇಜರ್ ಓರಿಯಂಟಲ್ ಇನ್ಶೂರೆನ್ಸ್ ಕಂ.ಲಿ.,
   ವಿಜಾಪುರ.

## ಪ್ರಕಟಣೆ

ಶ್ರೀಮತಿ ಶೈಲಶ್ರೀ, ಮೋಗೇಶ ನೆದಗೊಂಡಪ್ಪಾ, ತಂಗನ ಬಸವ್ವಾ ಬಿರಾದಾರ ಇವರುಗಳಾದ ತಾವು ಮೃತ ನೀಲಕಂಠಪ್ಪಾ ಬಿರಾದಾರ ಇವರ ಹೆಂಡತಿ, ಮಗ ಮತ್ತು ತಂದೆ-ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ನೀಲಕಂಠಪ್ಪಾ ಇವರು ಒಂದನೇ ಪ್ರತಿವಾದಿಗಳಾದ ರಮೇಶ ಶಿವಶರಣ ಪೂಜಾರಿ ಇವರ ಲಾರಿಯಲ್ಲಿ ಚಾಲಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತ ಶಾಸನ ಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಾಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಜಿ. ಸಿದ್ದಲಿಂಗಪ್ಪ ಆಲೂರು
ಪಿ.ಆರ್.793
ಕಾರ್ಮಿಕ ಪರಿಹಾರ ಆಯುಕ್ತರು ಉಪವಿಭಾಗ-2,
ಬಿಜಾಪುರು ಜಿಲ್ಲೆ, ಬಿಜಾಪುರ.

## ನೋಂದಣಿ ಮತ್ತು ಮುದ್ರಾಂಕ ಇಲಾಖೆ

### ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, 7ನೇ ಮಹಡಿ ಜಲಮಂಡಳಿ ಕಟ್ಟಡ, ಕಾವೇರಿ ಭವನ, ಬೆಂಗಳೂರು ಇವರ ನಡವಳಿಗಳು

**ವಿಷಯ :** ಬೆಂಗಳೂರು ಜಿಲ್ಲಾ ನೇಮಕಾತಿ ಘಟಕದಲ್ಲಿನ ದ್ವಿತೀಯ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕಗೊಂಡ ಶ್ರೀ ಕಲ್ಲಿನಾಥ ಮಾಧವನವರ್ S/o ದೇವೇಂದ್ರಪ್ಪ ಮಾಧವನವರ್, ಬೆಂಗಳೂರು, ಇವರ ನೇಮಕಾತಿ ಆದೇಶವನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ: 21.11.2001ರನ್ವಯ ಪ್ರಕಟಿಸಿರುವ ಕೆ.ಸಿ.ಎಸ್. (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001.
2. ಈ ಕಛೇರಿ ಅಲಾಟ್‌ಮೆಂಟ್ ಆರ್ಡರ್ ಸಂಖ್ಯೆ: ಇಎಸ್‌ಟಿ-1-273/ 2001-02, ದಿನಾಂಕ: 14.12.2004.
3. ಈ ಕಛೇರಿಯ ನೇಮಕಾತಿ ಆದೇಶ ಸಂಖ್ಯೆ: ಇಎಸ್‌ಟಿ-1-273/ 2001-02, ದಿನಾಂಕ: 20.12.2004.

**ಪ್ರಸ್ತಾವನೆ:**

ಈ ಕಛೇರಿಯ ಉಲ್ಲೇಖ (2)ರ ಅಲಾಟ್‌ಮೆಂಟ್ ಆರ್ಡರ್‌ನಲ್ಲಿ ಕೆಳಕಂಡ ಅಭ್ಯರ್ಥಿಯನ್ನು ಬೆಂಗಳೂರು ಜಿಲ್ಲಾ ನೇಮಕಾತಿ ಘಟಕದಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕಾತಿ ಮಾಡಿಕೊಳ್ಳುವುದಕ್ಕಾಗಿ, ಅಲಾಟ್ ಮಾಡಿದ್ದರ ಮೇರೆ, ಕೆಳಕಂಡ ಅಭ್ಯರ್ಥಿಯನ್ನು ಉಲ್ಲೇಖ (3)ರ ಈ ಕಛೇರಿಯ ಆದೇಶದಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿ ಅದೇ ಆದೇಶದಲ್ಲಿ ಇವರನ್ನು ಅವರ ಹೆಸರಿನ ಮುಂದೆ ಸೂಚಿಸಿದ ಕಛೇರಿಗೆ ಸ್ಥಳ ನಿಯುಕ್ತಿ ಮಾಡಿ, ಸದರಿ ನೇಮಕಾತಿ ಆದೇಶವು ಮುಟ್ಟಿದ ದಿನಾಂಕದಿಂದ ಹದಿನೈದು (15) ದಿನಗಳೊಳಗೆ ನೇಮಕಾತಿ ಮಾಡಿದ ಕಛೇರಿಯಲ್ಲಿ ತಪ್ಪದೇ ಕೆಲಸಕ್ಕೆ ಹಾಜರಾಗುವಂತೆ ಸದರಿ ಅಭ್ಯರ್ಥಿಗೆ ಸೂಚಿಸಿ, ಉಲ್ಲೇಖ (3)ರ ಸದರಿ ನೇಮಕಾತಿ ಆದೇಶವನ್ನು ಆರ್‌ಪಿಎಡಿ ಮೂಲಕ ಕೆಳಕಂಡ ಅಭ್ಯರ್ಥಿಗೆ ಕಳುಹಿಸಲಾಗಿತ್ತು.

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಎಸ್‌ಸಿ/ ಎಸ್‌ಟಿ | ಅಭ್ಯರ್ಥಿಯನ್ನು ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿ ಸ್ಥಳ ನಿಯುಕ್ತಿಗೊಳಿಸಿದ ಕಛೇರಿ | ವರ್ಗೀಕರಣ |
|---|---|---|---|---|
| 1. | ಕಲ್ಲಿನಾಥ ಮಾಧವನವರ್ S/o ದೇವೇಂದ್ರಪ್ಪ ಮಾಧವನವರ್, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ ನಂ. 280, 17ನೇ ಸಿ ಮೈನ್ ರೋಡ್, 3ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-560 010. | ಎಸ್‌ಟಿ | ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರ ಕಛೇರಿ, 7ನೇ ಮಹಡಿ, ಕಾವೇರಿ ಭವನ, ಜಲಮಂಡಳಿ ಕಟ್ಟಡ, ಬೆಂಗಳೂರು. (ಬೆಂಗಳೂರು ಜಿಲ್ಲಾ ನೇಮಕಾತಿ ಘಟಕ) | ಪರಿಶಿಷ್ಟ ಪಂಗಡ ಸಾಮಾನ್ಯ ಅಭ್ಯರ್ಥಿ ಮುಖ್ಯಪಟ್ಟಿ |

ಮೇಲ್ಕಂಡ ಅಭ್ಯರ್ಥಿಯು ಈ ಕಛೇರಿಯ ಉಲ್ಲೇಖ (3)ರ ನೇಮಕಾತಿ ಆದೇಶವನ್ನು ದಿನಾಂಕ: 23.12.2004ರಂದು ಸ್ವೀಕರಿಸಿದ್ದರೂ ಸಹ ಸದರಿಯವರು ಅವರನ್ನು ನೇಮಕ ಮಾಡಿದ ಕಛೇರಿಯಲ್ಲಿ ಈ ತಹಲ್‌ವರೆವಿಗೂ ಕೆಲಸಕ್ಕೆ ಹಾಜರಾಗಿರುವುದಿಲ್ಲ. ಕೆಲಸಕ್ಕೆ ಹಾಜರಾಗಲು ಇವರಿಗೆ ನೀಡಿದ ಹದಿನೈದು ದಿನಗಳ ಕಾಲಾವಕಾಶವು ದಿನಾಂಕ: 07.01.2005ರಂದು ಮುಕ್ತಾಯವಾಗಿರುತ್ತದೆ. ಉಲ್ಲೇಖ (3)ರ ಈ ಕಛೇರಿಯ ನೇಮಕಾತಿ ಆದೇಶವನ್ನು ಇವರು ಸ್ವೀಕರಿಸಿದ ನಂತರವೂ, ಕೆಲಸಕ್ಕೆ ಹಾಜರಾಗಲು ನೀಡಿದ ಹದಿನೈದು ದಿನಗಳ ಕಾಲಾವಕಾಶಕ್ಕಿಂತ ಇನ್ನೂ ಹೆಚ್ಚಿನ ಕಾಲಾವಕಾಶ ನೀಡಬೇಕೆಂದು ಈ ಅಭ್ಯರ್ಥಿಯು ಯಾವುದೇ ರೀತಿಯ ಕೋರಿಕೆಯನ್ನು ಈ ಕಛೇರಿಗೆ ಸಲ್ಲಿಸಿರುವುದಿಲ್ಲ. ಆದ್ದರಿಂದ ಮೇಲ್ಕಂಡ ಅಭ್ಯರ್ಥಿಯ ನೇಮಕಾತಿಯನ್ನು ರದ್ದುಪಡಿಸುವುದು ಸೂಕ್ತವೆಂದು ಮನಗಂಡು ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಸಿಬ್ಬಂದಿ 1-273/ 2001-02, ದಿನಾಂಕ: 20ನೇ ಮೇ, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಉಲ್ಲೇಖ (1)ರ ಅಧಿಸೂಚನೆ ಅನ್ವಯ ಹಾಗೂ 1977ರ ಕೆ.ಸಿ.ಎಸ್. (ಸಾಮಾನ್ಯ ನೇಮಕಾತಿ) ನಿಯಮಗಳಲ್ಲಿನ 18 (3)ನೇ ನಿಯಮದನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಮೇಲ್ಕಂಡ ಅಭ್ಯರ್ಥಿಯಾದ ಶ್ರೀ ಕಲ್ಲಿನಾಥ ಮಾಧವನವರ್ ಬಿನ್ ದೇವೇಂದ್ರಪ್ಪ ಮಾಧವನವರ್, ರಾಜಾಜಿನಗರ ಇವರನ್ನು ಈ ಇಲಾಖೆಯಲ್ಲಿನ ಬೆಂಗಳೂರು ಜಿಲ್ಲಾ ನೇಮಕಾತಿ ಘಟಕದ ಬ್ಯಾಕ್‌ಲಾಗ್ ಹುದ್ದೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿದ ಈ ಕಛೇರಿಯ ಉಲ್ಲೇಖ (3)ರ ನೇಮಕಾತಿ ಆದೇಶವನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಮೇಲ್ಕಂಡ ಅಭ್ಯರ್ಥಿಯು ಈ ತಕ್ಷಣದಿಂದ ಈ ಇಲಾಖೆಯಲ್ಲಿನ ಬೆಂಗಳೂರು ಜಿಲ್ಲಾ ನೇಮಕಾತಿ ಘಟಕದ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ನೇಮಕಾತಿ ಹಕ್ಕನ್ನು ಕಳೆದುಕೊಂಡಿರುವರೆಂದು ಹಾಗೂ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದ್ದಲ್ಲವೆಂದು ಹಾಗೂ ಸದರಿಯವರು ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲವೆಂದು ಈ ಮೂಲಕ ಆದೇಶಿಸಿದೆ.

ನೇಮಕಾತಿ ಪ್ರಾಧಿಕಾರಿ ಹಾಗೂ ನೋಂದಣಿ ಮಹಾಪರಿವೀಕ್ಷಕರು
ಪಿ.ಆರ್.795
ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು.

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ, ಇವರ ನ್ಯಾಯಾಲಯ ಸಾಗರ

### ಅಧಿಸೂಚನೆ

### ಸಂಖ್ಯೆ: ಬಿ3:ಅಮೊ.ವಾಹನ.03/05-06, ದಿನಾಂಕ: 21ನೇ ಮೇ, 2005

ಸಾಗರ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧದ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಸಾಗರ ವಿಭಾಗದ ಇಲಾಖಾ ಸಿಬ್ಬಂದಿ ವರ್ಗದವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಸದರಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ಪ್ರಕಾರ ಕ್ರಮ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ತಪಶೀಲು ಕೆಳಕಂಡಂತಿರುತ್ತದೆ.

| ಕ್ರ.ಸಂ. | ವಾಹನಗಳ ವಿವರ | ಅರಣ್ಯ ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1 | 2 | 3 | 4 | 5 |
| 1. | Tractor No. -NIL- | ಸ.ಅ.ಸಂ. ಅ.ಸಂ. ಶಿಕಾರಿಪುರ ಅ.ಮೊ. ನಂ.15/2005-06 | 9ಬಿ819476 | 075-1999 |
| 2. | Maruthi Van No. KA-14-M-3918 | ಸ.ಅ.ಸಂ. ಅ.ಸಂ. ಶಿಕಾರಿಪುರ ಅ.ಮೊ. ನಂ.13/2005-06 | ಕಾಣಿಸುತ್ತಿಲ್ಲ | ಕಾಣಿಸುತ್ತಿಲ್ಲ |

ಈ ಮೇಲ್ಕಂಡ ವಾಹನದ ಬಗ್ಗೆ ಯಾರು ವಾರಸುದಾರರು ಇಲ್ಲಿಯವರೆಗೆ ಹಾಜರಾಗದೇ ಇರುವುದರಿಂದ ಸದರಿ ವಾಹನಗಳ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕು ಬಾಧ್ಯತೆಗಳನ್ನು ಕೆಳ ಸಹಿ ಮಾಡಿರುವವರ ಸಮ್ಮುಖದಲ್ಲಿ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನಗಳನ್ನು ಶ್ರೀಗಂಧ ಮತ್ತು ಇತರೇ ಅರಣ್ಯ ಉತ್ಪನ್ನವನ್ನು ಕಳ್ಳಸಾಗಾಣಿಕೆ ಮಾಡಲು ಉಪಯೋಗಿಸಿದ್ದಕ್ಕಾಗಿ ವಾಹನಗಳನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳು ಅಧಿಕೃತ ಸಮಜಾಯಿಷಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿ ಮಾಡಿದವರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲ್ಕಂಡ ವಾಹನಗಳ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್.796

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಸಾಮಾಜಿಕ ಅರಣ್ಯ ವಿಭಾಗ, ತುಮಕೂರು

### ನಾಟ ಮತ್ತು ಸೌದೆ

### ಬಹಿರಂಗ ಮರು ಹರಾಜು ಪ್ರಕಟಣೆ

### ಸಂಖ್ಯೆ: ಎ5/ ಎಫ್‌ಒಸಿ/ ಟಿಎಂಬಿ/ ವಿವ 52/ 04-05, ದಿನಾಂಕ: 24ನೇ ಮೇ, 2005

ತುಮಕೂರು ಜಿಲ್ಲೆ, ಕೊರಟಗೆರೆ ತಾಲ್ಲೂಕು, ಕುರಿಹಳ್ಳಿ ಕೆರೆ ಅಂಗಳದಲ್ಲಿ ತುಮಕೂರು ಸಾಮಾಜಿಕ ಅರಣ್ಯ ವಿಭಾಗದಿಂದ ಬೆಳೆಸಲಾದ ನೆಡುತೋಪಿನಲ್ಲಿ ಅರಣ್ಯ ಮೊಕದ್ದಮೆಗೆ ಒಳಗಾದ ನಾಟಾ/ ಸೌದೆಯನ್ನು ಘನ ನ್ಯಾಯಾಲಯದ ಆದೇಶದಂತೆ ಬಹಿರಂಗ ಹರಾಜು ಮೂಲಕ ವಿಲೆ ಮಾಡಲು ಹೊರಡಿಸಿದ **ಮರು ಹರಾಜು ಇಸ್ತಿಹಾರ್.**

| ಕ್ರ.ಸಂ. | ವಿವರ | ಜಾತಿ | ಪರಿಮಾಣ | ಹರಾಜು ಸ್ಥಳ | ದಿನಾಂಕ | ಸಮಯ |
|---|---|---|---|---|---|---|
| 1. | ಮೊಕದ್ದಮೆ ಸಂಖ್ಯೆ:<br>ಅ) ಸಿ.ಆರ್.ನಂ.186/04 ರಿಂದ ಸಿ.ಆರ್. ನಂ. 192/04,<br>ಆ) ಸಿ.ಆರ್.ನಂ.197/ 04 (ಎ ಯಿಂದ ಇ) | ಕರಿ ಜಾಲಿ | 827=27.737 ಘ.ಮೀ. ನಾಟ | ತಾಲ್ಲೂಕು ಕಛೇರಿ ಆವರಣ, ಕೊರಟಗೆರೆ. | 27.06.2005 | 3:00 ಅಪರಾಹ್ನ |
| 2. | ಸಿ.ಆರ್. ನಂ.197/04, (ಎಫ್ ಮತ್ತು ಜಿ) | ಕರಿ ಜಾಲಿ | 15.20 ಟನ್ ಸೌದೆ | ತಾಲ್ಲೂಕು ಕಛೇರಿ ಆವರಣ, ಕೊರಟಗೆರೆ. | 27.06.2005 | 3:00 ಅಪರಾಹ್ನ |

### ಷರತ್ತುಗಳು

1. ಹರಾಜಿನಲ್ಲಿ ಭಾಗವಹಿಸುವವರು ಹರಾಜು ಪ್ರಾರಂಭಿಸುವುದಕ್ಕೆ ಮುಂಚಿತವಾಗಿ ರೂ.1000-00 ಗಳನ್ನು ವಲಯ ಅರಣ್ಯಾಧಿಕಾರಿ, ಸಾಮಾಜಿಕ ಅರಣ್ಯವಲಯ, ಕೊರಟಗೆರೆ ಇವರಿಗೆ ಠೇವಣಿ ಮಾಡುವುದು.
2. ಹರಾಜಿಗೆ ಇಟ್ಟಿರುವ ನಾಟ ಮತ್ತು ಸೌದೆಗಳನ್ನು ಕೊರಟಗೆರೆ ತಾಲ್ಲೂಕು ಕಛೇರಿ ಆವರಣದಲ್ಲಿ ಸಂಗ್ರಹಿಸಲಾಗಿದೆ. ಅವು ಹೇಗೆ ಇವೆ ಅದೇ ಸ್ಥಿತಿಯಲ್ಲಿ ವಿಲೆ ಮಾಡಲಾಗುವುದು. ದಿನಾಂಕ: 27.06.05 ರಂದು ಹರಾಜಾಗದೆ ಉಳಿದ ಲಾಟುಗಳನ್ನು ದಿನಾಂಕ: 28.06.2005ರಂದು ಹರಾಜು ಮಾಡಲಾಗುವುದು.
3. ಹರಾಜಿನಲ್ಲಿ ಖರೀದಿಸಿದ ನಾಟ/ ಸೌದೆಗಳನ್ನು ಸಾಗಿಸಲು ವಲಯ ಅರಣ್ಯಾಧಿಕಾರಿ, ಸಾಮಾಜಿಕ ಅರಣ್ಯವಲಯ, ಕೊರಟಗೆರೆ ಇವರಿಂದ ಪರ್ಮಿಟ್ ಪಡೆದು ಸಾಗಾಣಿಕೆ ಮಾಡಿಕೊಳ್ಳತಕ್ಕದ್ದು.
4. ಹರಾಜು ಮುಗಿದ ಕೂಡಲೇ ಖರೀದಿಸಿದ ನಾಟ/ ಸೌದೆಯ ಬೆಲೆ ಮತ್ತು ಚಾಲ್ತಿಯಲ್ಲಿರುವ ತೆರಿಗೆಗಳನ್ನು ಸ್ಥಳದಲ್ಲೆ ವಲಯ ಅರಣ್ಯಾಧಿಕಾರಿ, ಸಾಮಾಜಿಕ ಅರಣ್ಯವಲಯ, ಕೊರಟಗೆರೆ ಇವರಿಗೆ ಸಂದಾಯ ಮಾಡಿ ರಶೀದಿ ಪಡೆಯುವುದು. ಹರಾಜನ್ನು ಅಂಗೀಕರಿಸಿದ ಆದೇಶ ನೀಡಿದ ಮೇಲೆ ನಾಟ/ ಸೌದೆಗಳನ್ನು ವಶಕ್ಕೆ ಪಡೆದು ಒಂದು ವಾರದ ಒಳಗೆ ಸಾಗಾಣಿಕೆ ಮಾಡಿಕೊಳ್ಳತಕ್ಕದ್ದು.
5. ಹೆಚ್ಚಿನ ವಿವರಗಳಿಗಾಗಿ ವಲಯ ಅರಣ್ಯಾಧಿಕಾರಿ, ಸಾಮಾಜಿಕ ಅರಣ್ಯವಲಯ, ಕೊರಟಗೆರೆ ಇವರ ಕಛೇರಿಯನ್ನು ಸಂಪರ್ಕಿಸಿ ಪಡೆಯಬಹುದು.

ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಮಾಜಿಕ ಅರಣ್ಯ
ವಿಭಾಗ, ತುಮಕೂರು.

ಪಿ.ಆರ್.797